


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 1023(982)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಜೆ. ಓ. ಸಿ. ನೌಕರರ ವಿಲೀನ ಕುರಿತು

(ಅ) ಜೆ.ಓ.ಸಿ ನೌಕರರನ್ನು ವಿಶೇಷ ನಿಯಮಗಳ ಅನ್ವಯ ಎಷ್ಟು ವಿಲೀನಗೊಳಿಸಲಾಯಿತು; ಯಾವ ಯಾವ ಇಲಾಖೆಗಳಲ್ಲಿ, ಯಾವ ಯಾವ ಹುದ್ದೆಗಳಿಗೆ ವಿಲೀನಗೊಳಿಸಲಾಯಿತು; (ವಿವರ ನೀಡುವುದು)

(ಆ) ಆರ್ಥಿಕ ಇಲಾಖೆಯು ಜೆ.ಓ.ಸಿ ನೌಕರರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಲು ಅನುಮತಿಸಿರುವ ಸಂಖ್ಯೆ ಎಷ್ಟು; ಇದುವರೆಗೂ ವಿಲೀನಗೊಳಿಸಲಾಗಿರುವ ಜೆ.ಓ.ಸಿ ನೌಕರರ ಸಂಖ್ಯೆ ಎಷ್ಟು;

(ಇ) 5 ವರ್ಷಕ್ಕಿಂತ ಕಡಿಮೆ ಸೇವೆ ಸಲ್ಲಿಸಿದ ನೌಕರರನ್ನು ವಿಲೀನ ಪ್ರಕ್ರಿಯೆಯಲ್ಲಿ ಪರಿಗಣಿಸಬಾರದು ಎಂದು ನಿರ್ಣಯ ತೆಗೆದುಕೊಂಡವರು ಯಾರು ಮತ್ತು ಯಾವ ಕಾರಣಕ್ಕೆ ಈ ನಿರ್ಣಯ ತೆಗೆದುಕೊಳ್ಳಲಾಯಿತು; (ವಿವರ ನೀಡುವುದು)

(ಈ) 5 ವರ್ಷಕ್ಕಿಂತ ಕಡಿಮೆ ಸೇವೆ ಸಲ್ಲಿಸಿದ ನೌಕರರನ್ನು ವಿಲೀನ ಪ್ರಕ್ರಿಯೆಯಲ್ಲಿ ಪರಿಗಣಿಸಬಾರದು ಎಂದು ತೀರ್ಮಾನಿಸಿರುವುದು ಸಂವಿಧಾನದ ಮೂಲಭೂತ ಹಕ್ಕುಗಳಾದ ಆರ್ಟಿಕಲ್ 14 ಮತ್ತು 16ಕ್ಕೆ ಸಂಪೂರ್ಣ ವಿರುದ್ದ ಎಂಬುದರ ಕುರಿತು ಸರ್ಕಾರದ ನಿಲುವೇನು?